# 54

# ಮಹಾತ್ಮ

(ಶೂರರ ಅಹಿಂಸೆ, ನಿಜವಾದ ಅಹಿಂಸೆ,
ವೈಷ್ಣವ ಜನತೋ, ರಾಮರಾಜ್ಯ,
ಪರಮಾತ್ಮನ ಭಕ್ತರು, ಇತ್ಯಾದಿ.)


ಸಂಗ್ರಾಹಕರು, ಅನುವಾದಕರು:

ಶ್ರೀ| ಎಲ್. ಎಸ್. ನಾಯಕ.



1955.

ಮಂಗಳೂರು.





ಒಂದಾಣೆ ಮಾಲೆ

# ಒಂದಾಣೆ ಮಾಲೆಯಲ್ಲಿ ಈ ವರೆಗೆ ಪ್ರಕಟವಾದ ಪುಸ್ತಕಗಳು

೧. *ಕೆಪ್ಪಟಿರಾಯ (ವಿನೋದ ಕಥೆ)
೨. *ನಾರೀಶ್ವರರು (ಏಕಾಂಕ ಪ್ರಹಸನ)
೩. *ಕಳ್ಳನಿಗೆ ಸಂಭಾವನೆ ಮತ್ತು ಇತರ ಕಥೆಗಳು.
೪. *ಸದ್ರಿಸುಬ್ಬ (ಏಕಾಂಕ ಪ್ರಹಸನ)
೫. *ಅದ್ಭುತತ್ಯಾಗ ಮತ್ತು ಇತರ ಕಥೆಗಳು
೬. ಚುನಾವಣೆ ಅರ್ಥಾತ್ ಬನಾವಣೆ (ಏಕಾಂಕ ಪ್ರಹಸನ)
೭. *'ಬೀಡಿ ಸೇದಬೇಡಿ' ಮತ್ತು 'ಅ ಮಗು' (ವಿನೋದ ಕಥೆಗಳು)
೮. *ಇಂಗ್ಲಿಷ್-ಕನ್ನಡ ಅರ್ಥಕೋಶ
೯. *ಲಂಚಕ್ಕೆ ಸಂಚಕಾರ
೧೦. *ಟಿಶ್ಯೂ ಔಷಧಿಗಳ ಕೈಪಿಡಿ.
೧೧. *ಶ್ರೀಕ್ಷೇತ್ರಧರ್ಮಸ್ಥಳ (ದ್ವಿ. ಮುದ್ರಣ)
೧೨. ಜೀವದ ಮೌಲ್ಯ ಮತ್ತು ಇತರ ಕಥೆಗಳು
೧೩. ಸತ್ತವನ ಸೇಡು ಮತ್ತು ಇತರ ಕಥೆಗಳು
೧೪. ವೆಂಕಟನ ಸಂಕಟ (ಏಕಾಂಕ ಪ್ರಹಸನ)
೧೫. ಬಾಬಿಗೆ ಬಾಸಿಂಗ (ಏಕಾಂಕ ಪ್ರಹಸನ)
೧೬. ವೇಣೂರಿನ ಗತವೈಭವ.
೧೭. ಒಗಟುಗಳು [ದ್ವಿತೀಯ ಮುದ್ರಣ]
೧೮. ಜಗಳಗಂಟಿ ಮತ್ತು ಇತರ ಕಥೆಗಳು
೧೯. ರಥೋತ್ಸವ.
೨೦. ಕರಿನಾಯಿ ಮತ್ತು ಮುಪ್ಪು
೨೧. *ಭಾರತದ ಮಹಾನಗರಗಳು (ಭಾಗ ೧)
೨೨. ತಿರುಕ್ಕುರಲ್
೨೩. ಸೂರ್ಯನ ಸಂಸಾರ ಮತ್ತು ಇತರ ಕಥೆಗಳು.
೨೪. ಭಾರತದ ಮಹಾನಗರಗಳು (ಭಾಗ ೨)
೨೫. ಧೈರ್ಯ ಮತ್ತು ಇತರ ಸತ್ಯಕಥೆಗಳು.
೨೬. *ಮಾರಾವತಾರ (ಏಕಪಾತ್ರ ಯಕ್ಷಗಾನ ಪ್ರಬಂಧ)
೨೭. ಹಾಸವಿಲಾಸ (ನಗೆಹನಿಗಳು)
೨೮. ಸತ್ಯವಂತ ಬಾಬಿ (ಏಕಾಂಕ ಪ್ರಹಸನ)
೨೯. ಚಾಣಕ್ಯನ ಒಗಟುಗಳು
೩೦. ಜಾತಕ ಕಥೆಗಳು
೩೧. ಕಾರ್ಕಳದ ಚರಿತ್ರೆ
೩೨. ಮರ್ಜಿ (ಏಕಾಂಕ ಪ್ರಹಸನ)
೩೩. ದರ್ಶನದ ಕಥೆಗಳು
೩೪. ಅಳುವಿನ ಹೊಳೆ ಮತ್ತು ಕೇಶವಭೂಪ (ಮಕ್ಕಳ ಕಥೆಗಳು)
೩೫. ಶರಾಬಿನ ಸಿಪಾಯಿಗಳು
೩೬. ಉಪದೇಶ ಶತಕ
೩೭. ನಿಮಗೆ ಗೊತ್ತಿದೆಯೇ?
೩೮. ಚತುರ ಚಮತ್ಕಾರ
೩೯. ಸತೀ ಸಾವಿತ್ರಿ
೪೦. ಆಭರಣಗಳ ಪೆಟ್ಟಿಗೆ, ಇತರ ಕಥೆಗಳು
೪೧. ಭಾರತದ ಮಂತ್ರಿಮಂಡಲಗಳು
೪೨. ಕಾಲುಬಳೆಯ ಕಥೆ
೪೩. ಭಾರತದ ನಾಲ್ಕು ಕಲಶಗಳು
೪೪. ವ್ಯಸನದಿಂದ ಲಾಭ ಮತ್ತು ಇತರ ಕಥೆಗಳು
೪೫. ಸುಭಾಷಿತ
೪೬ ೧೮೫೭ರ "ಸಿಪಾಯಿ ದಂಗೆ" ಅಥವಾ ಬ್ರಿಟಿಷರಿಗೆದುರಾಗಿ ಭಾರತೀಯರ ಸ್ವಾತಂತ್ರ್ಯಸಮರ
೪೭. ಅಕಾಂಡ ತಾಂಡವ (ರೇಡಿಯೋನಾಟಕ)
೪೮. ಸಾಹಸದ ಕಥೆಗಳು.
೪೯. ಸಂಜ್ಞಾ ಜ್ಞಾನ ಕೋಶ
೫೦. ಪಂಡಿತನ ಪಿಟೀಲು
೫೧. ಭೋಗಯಾತ್ರೆ
೫೨. ಸಂಗ್ರಾಮಸಿಂಹ
೫೩. ಧರ್ಮ ಶಿಕ್ಷಾ
೫೪. ಮಹಾತ್ಮ

* ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

ಈ ವರೆಗೆ ಐವತ್ತನಾಲ್ಕು ಪುಸ್ತಕಗಳಲ್ಲಿ, ಐವತ್ತನಾಲ್ಕು ಆಣೆಗಳಿಗೆ, 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, 1188 ಪುಟಗಳನ್ನು ಕೊಟ್ಟಿರುತ್ತದೆ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ, ಮಂಗಳೂರು-೧

# “ವೈಷ್ಣವ ಜನ ತೋ”

[ರಾಗ: ಕಮಾಚ. ಧುಮಾಳಿ]

(ನರಸಿಂಹ ಮೆಹತಾ ಅಥವಾ ನರ್ಸೀಭಗತನ ಈ ಗೀತವು ಮಹಾತ್ಮಾಜಿಯ ಮೆಚ್ಚುಗೆಯ ಗೀತವಾಗಿತ್ತು. ಮಾನವನ ನಡತೆಗೆ ಈ ಗೀತವು ಎಲ್ಲ ನೀತಿಯನ್ನೊಳಗೊಂಡಿದೆಯೆಂದು ಮಹಾತ್ಮರು ಹೇಳುತ್ತಿದ್ದರು. ಆ ಗೀತದ ಭಾವಾರ್ಥವನ್ನು (ದಿವಂಗತ) ಶ್ರೀ| ಮೂಲ್ಕಿ ಸುಬ್ಬರಾವ್‌ರವರು ಪ್ರಭಾತಕ್ಕಾಗಿ ಬರೆದುದನ್ನು ಈ ಗೀತೆಯೊಂದಿಗೆ ಇಲ್ಲಿ ಪ್ರಕಟಿಸಿರುವೆವು.)

ವೈಷ್ಣವ ಜನ ತೋ ತೇನೇ ಕಹಿಯೇ ಜೇ,
ಪೀಡ ಪರಾಯಿ ಜಾಣೇ ರೇ |
ಪರ ದುಃಖೇ ಉಪಕಾರ ಕರೇ ತೋ ಯೇ,
ಮನ ಅಭಿಮಾನ ನ ಆಣೇ ರೇ ||
ಸಕಲ ಲೋಕ ಮಾ ಸಹುನೇ ವಂದೆ,
ನಿಂದಾ ನಕರೇ ಕೇ ನೀರೇ |
ವಾಚ ಕಾಚ ಮನ ನಿಶ್ಚಲ ದಾಖೇ,
ಧನ ಧನ ನೇ ನೀರೇ ||
ಸಮ ದೃಷ್ಟಿನೇ ತೃಷ್ಣಾ ತ್ಯಾಗೀ,
ಪರಸ್ತ್ರೀ ಜೇನೇ ಮಾತರೇ |
ಜಿಹ್ವಾ ಥಕೀ ಅಸತ್ಯ ನ ಬೋಲೇ,
ಪರಧನ ನವಜಾಲೇ ಹಾಥರೇ ||
ಮೋಹ ಮಾಯಾ ವ್ಯಾಪೇ ನಾಹಿ ಜೇನೇ,
ದೃಢ ವೈರಾಗ್ಯ ಜೇನಾ ಮನ ಮಾಂರೇ |
ರಾಮ ನಾಮಶುಂ ತಾಲೀ ಲಾಗೀ,
ಸಕಲ ತೀರಥನೇ ನಾ ತನಮಾರೇ ||
ವಣ ಲೋಭೀನೇ ಕಪಟರಹಿತ ಛೇ,
ಕಾಮಕ್ರೋಧ ನಿವಾರ್ಯಾರೇ |
ಭಣೇ ನರಸ್ಯೆಂ ಯೋ ತೇನುಂ ದರಸನ ಕರತಾಂ,
ಕುಲ ಯೋಕೋಂ ತೇರತಾರ್ಯಾ ರೇ ||

# ವೈಷ್ಣವನು ಯಾರು?

(ಲೇಖಕರು: ಶ್ರೀ. ದಿ| ಮೊಳ್ಳಿ ಸುಬ್ಬರಾವ್)

(ಇದೇ ಸಂಚಿಕೆಯಲ್ಲಿ ಕೊಟ್ಟಿರುವ 'ವೈಷ್ಣವ ಜನತೋ'—ಗೀತದ ಪಂಕ್ತಿಗಳನುಸಾರವಾಗಿ ಅರ್ಥ ವಿವರಣೆ ಕೊಡಲ್ಪಟ್ಟಿದೆ.)

ಈ ಕುರಿತು ಸಾಧು ನರಸಿಂಹ ಮೆಹತಾ ಯಾನೆ ನರಸಿಭಗತರು ರಚಿಸಿದ ಮತ್ತು ಮಹಾತ್ಮಾ ಗಾಂಧಿಯವರ ಮೆಚ್ಚುಗೆಯ ಹಾಡಿನ ಕುರಿತು ಎರಡು ಮಾತು ಹೇಳಬೇಕಾಗಿ ನನ್ನ ಮಿತ್ರ ಪ್ರಭಾತ ಸಂಪಾದಕರು ಅಪೇಕ್ಷಿಸಿದಂತೆ ಯಥಾಶಕ್ತಿ ಬರೆಯುವೆನು.

"ನರ್ಸಿಭಗತ"ನು ನಿರಂತರ ಪರಮಾತ್ಮನ ಸ್ಮರಣೆಯಲ್ಲಿದ್ದವನು. ತನ್ನ ಸಮಗ್ರ ಜೀವನವನ್ನು ಪರೋಪಕಾರಕ್ಕೆ ಸಮರ್ಪಿಸಿದನು ಮತ್ತು ಭಗವಂತನನ್ನೆ ಸೇರಿದನು ಎಂದು ತೋರುವುದು. ನನ್ನನ್ನೇ ಸೇರುವಿ ಎಂದು ಭಗವಂತನ ವಚನವಿದೆ. ಮಹಾತ್ಮಾಜೀಯವರ ಅಂತಿಮ ಶಬ್ದಗಳಾದರೂ "ರಾಮ ರಾಮ" ಎಂದೇ ಇದ್ದುವು. ಇಂತಹ ಸಾಧು ಸಂತರ ಕೀರ್ತಿಗಳಿಂದ ಮತ್ತು ರಾಮ ಜಪದಿಂದ ಮಹಾತ್ಮರು ಸ್ಫೂರ್ತಿಯನ್ನು ಹೊಂದುತಿದ್ದರು; ತಮ್ಮ ಜೀವನದ ಪ್ರೇರಣೆಯನ್ನು ಪಡೆಯುತ್ತಿದ್ದರು—ಎಂದು ಊಹಿಸಬಹುದು. ಕಾಯಿಕ ವಾಚಕ ಮಾನಸಿಕ ಕರ್ಮಗಳಲ್ಲಿ ಪರಮಾತ್ಮನ ಅನುಸಂಧಾನವಿರಬೇಕೆಂಬುದೇ ತಾತ್ಪರ್ಯ.

ಈ ಸಂದರ್ಭದಲ್ಲಿ ಮಹಾತ್ಮರು ಯಾವದೊಂದು ತತ್ವವನ್ನು ಸ್ವೀಕರಿಸಿದರೆ ಅವರು ಅದನ್ನು ಆಚರಣೆಗೆ ತರುತಿದ್ದರೆಂಬುದನ್ನು ನೆನಪಿನಲ್ಲಿಡಬೇಕು. ಅಷ್ಟು ಮಾತ್ರವಲ್ಲ, ಆ ತತ್ವದ ಪರಿಣಾಮ ಪರಂಪರೆ (implications)ಯನ್ನು ಸಹ ಒಪ್ಪಿಕೊಂಡು ಆಚರಿಸುತಿದ್ದರು.

ಒಮ್ಮೆ ಕಲಿತ ತತ್ವವನ್ನು ಎಂದೂ ಮರೆಯರು. ಚಿಕ್ಕಂದಿನಲ್ಲಿ ಅವರಿಗೆ ರಾಮನಾಮದ ಶಕ್ತಿಯಿಂದ ಕತ್ತಲೆ ಮತ್ತು ಭಯನಾಶವಾಗುವದೆಂದು ಒಬ್ಬ ಹಳೆಯವಳು ಹೇಳಿದ್ದಳು. ತದನಂತರ ಅವರು ಚಿಕ್ಕಂದಿನಲ್ಲಿ ನಿರ್ಭೀತರಾಗಿ ಕತ್ತಲೆ ಕೋಣೆಗೆ ಹೋಗುತಿದ್ದರು. ತಾನು ಬೆಳೆಯುತ್ತಾ ರಾಮನು ಪರಬ್ರಹ್ಮನಾದ. ಅಜ್ಞಾನದ ಕತ್ತಲೆ ಹೋಗಿ ಎಲ್ಲ ಕಾರ್ಯರಂಗದಲ್ಲಿಯೂ ನಿರ್ಭೀತರಾಗಿ ವರ್ತಿಸಿದರು. ಅಂತೆಯೇ ಹರಿಶ್ಚಂದ್ರನ ಕಥೆಕೇಳಿ ತಾನೂ ಸತ್ಯವನ್ನು ಪರಿಪಾಲಿಸಬೇಕೆಂದು ಚಿಕ್ಕಂದಿನಲ್ಲಿ ನಿರ್ಧರಿಸಿದರು. ಎಲ್ಲ ಮಂತ್ರಗಳಂತೆ ರಾಮ ಮಂತ್ರವೂ ಶಾಂತತೆಯಿಂದ ಏಕಾಗ್ರತೆಯಿಂದ ಜಪಿಸುತ್ತಾ ಇದ್ದರೆ ಬಲಹೊಂದುವದು, ವ್ಯಾಪಕತೆಯನ್ನು ಪಡೆಯುವದು. ಇಡೀ ಜೀವನವನ್ನೇ ಪರಿವರ್ತಿಸುವುದು.

ವೈಷ್ಣವನೆಂದರೆ ವಿಷ್ಣುಭಕ್ತನಷ್ಟೆ. ವಿಷ್ಣುವೆಂದರೆ ಸಚರಾಚರದಲ್ಲಿ ವ್ಯಾಪಿಸಿರುವನೆಂದು ಭಾವಾರ್ಥ. ಈ ತತ್ವವನ್ನು ಸದಾ ಅಚರಣೆಯಲ್ಲಿಟ್ಟು ಇತರರೊಡನೆ ತನ್ನ ವ್ಯವಹಾರವನ್ನು ಬೆಳಸುವವನು ಯಥಾರ್ಥವಾದ ವೈಷ್ಣವನು.

ಈ ಕವಿತೆಯನ್ನು ಪರಿಶೀಲಿಸುವಾ. ಈ ಕವಿತೆಯನ್ನು ಓದುವಾಗ ವಿಲಿಯಮ್ ವರ್ಡ್ಸ್‌ವರ್ತ್ (William Word-worth) ಎಂಬ ಪ್ರಖ್ಯಾತ ಆಂಗ್ಲ ವೇದಾಂತಿಯ "Who is the happy warrior" (ಸುಖಿಯಾದ ಯೋಧನು ಯಾರು?) ಎಂಬ ಕವಿತೆಯು ಸ್ಮರಣೆಗೆ ಬರುತ್ತದೆ.

ಭಗವದ್ಗೀತೆಯಲ್ಲಿ ಅರ್ಜುನನು ಭಗವಂತನೊಡನೆ ಅಲ್ಲಲ್ಲಿ ಸ್ಥಿತಪ್ರಜ್ಞನ ಲಕ್ಷಣವೇನು, ತ್ರಿಗುಣಾತೀತನ ಕುರುಹು ಏನು, ಸನ್ಯಾಸದ ಲಕ್ಷಣ—ತ್ಯಾಗದ ಲಕ್ಷಣವೇನು ಎಂದು ವಗೈರೆ ಕೇಳುತ್ತಾನೆ. ಅಂದರೆ ಲಕ್ಷಣಗಳಿಂದ ಮನುಷ್ಯನ ಯೋಗ್ಯತೆ ನಿರ್ಧರಿಸಬೇಕು. ಅಂತೆಯೇ ವೈಷ್ಣವನ ಲಕ್ಷಣಗಳನ್ನು ಕವಿಯು ಹೇಳುತ್ತಾನೆ. ಅವು ಇಂತಿವೆ:

೧. ಅವನು ಇತರರ ನೋವನ್ನು ತಿಳಿಯುತ್ತಾನೆ. ಅರ್ಥಾತ್ ಅವರಲ್ಲಿ ಕನಿಕರಪಟ್ಟು ನಿವಾರಿಸುತ್ತಾನೆ: ಗೀತೆಯಲ್ಲಿ ಕೂಡಾ 'ವೇತ್ತಿ' 'ಜಾನಾತಿ' ಎಂಬ ಶಬ್ದಗಳು ತಿಳಿಯುವುದು ಮಾತ್ರವಲ್ಲ ಅದರಂತೆ ನಡೆಯುವದು ಎಂಬರ್ಥವನ್ನು ಒಳಗೊಂಡಿವೆ. ದುಃಖಿತರಾದವರನ್ನು ತನ್ನವರೆಂದು ತಿಳಿಯುವವನೇ ಸಾಧು. ಅವನಲ್ಲಿ ದೇವರ ಸಾನಿಧ್ಯವಿದೆ ಎಂದು ತುಕಾರಾಮು ಸಾಧು ಹಾಡಿದ್ದಾನೆ. "ತಪ್ಯಂತೇ ಲೋಕತಾಪೇನ ಸಂಭವಃ ಪ್ರಾಯಶೋಜನಾಃ"—ಭಾಗವತ.

೨. ಪರರ ದುಃಖದಲ್ಲಿ ಉಪಕಾರ ಮಾಡುತ್ತೇನೆ. ಅತನಿಗೆ ಮನಸ್ಸಿನಲ್ಲಿ ಅಭಿಮಾನವಿಲ್ಲ. ಪರಮಾತ್ಮನು ಎಲ್ಲರಲ್ಲಿಯೂ ಇದ್ದಾನೆ. ತಾನು ಲೋಕ ಸೇವೆಯ ಮೂಲಕ ಅತನ ಪೂಜೆ ಮಾಡುತ್ತೇನೆ ಎಂದ ಮೇಲೆ ಅಭಿಮಾನ ಉಳಿಯುವುದಿಲ್ಲ. ತಾನು ಸೇವಕನೆಂದಾಗುವನು.

೩. ಎಲ್ಲ ಲೋಕಕ್ಕೆ ಸರ್ವದಾ ವಂದನೆ ಮಾಡುತ್ತಾನೆ: ಯಾರನ್ನೂ ನಿಂದಿಸುವುದಿಲ್ಲ. ಪ್ರಹ್ಲಾದನಂತೆ ಎಲ್ಲೆಲ್ಲಿಯೂ ವಿಷ್ಣುವನ್ನು ಕಾಣುವವನು ಲೋಕದಲ್ಲಿರುವ ಅವನನ್ನು ವಂದಿಸುವನು. ಅವನಿಗೆ ಒಳ್ಳೆದೇ ತೋರುವುದರಿಂದ ನಿಂದೆಗೆ ಅವಕಾಶವಿಲ್ಲ.

೪. ಮನೋವಾಕ್ಕಾಯಗಳಲ್ಲಿ ನಿಶ್ಚಲನಾಗಿರುವನು. ದೃಢಸಂಕಲ್ಪ ದೃಢ ನಿಶ್ಚಯಗಳಿಲ್ಲದವನಿಗೆ ಇಹಪರಗಳಿಲ್ಲ, ಅವನು ಮುಂದುವರಿಯುವನು. ಅತನ ತಾಯಿಯು ಧನ್ಯಳು ಎನ್ನುತ್ತಾನೆ ಕವಿಯು. ಕೃಷ್ಣಪರಮಾತ್ಮನನ್ನು ದೇವಕಾ ಪರಮಾನಂದನೆಂದೂ ಶ್ರೀರಾಮಚಂದ್ರನನ್ನು ಕೌಸಲ್ಯಾ ಸುಪ್ರಜಾ ರಾಮನೆಂದೂ ಹೊಗಳಿರುವನು.

೫ (a) ಅವನಿಗೆ ಸಮದೃಷ್ಟಿ ಇರುವದು. (b) ಆತನು ಆಶೆಯನ್ನು ತೊರೆದಿದ್ದಾನೆ. (c) ಪರಸ್ತ್ರೀಯನ್ನು ತಾಯಿಯಂತೆ ಕಾಣುವನು

(a) 'ವಿದ್ಯಾವಿನಯ ಸಂಪನ್ನೇ ಬ್ರಾಹ್ಮಣೇ ಗವಿಹಸ್ತಿನಿ ಶುನಿಚೈವಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ॥—ಗೀತಾ v-18. ಇವಲ್ಲದೆ ವಿಷ್ಣು ಸಹಸ್ರನಾಮದಲ್ಲಿ ಪರಮಾತ್ಮನಿಗೆ "ಸಮ" ಎಂದು ಹೆಸರಿದೆ. ಆದ್ದರಿಂದ ವೈಷ್ಣವನಿಗೆ ಎಲ್ಲೆಲ್ಲಿಯೂ ವಿಷ್ಣುವು ಕಾಣುವುದರಿಂದ ಸಮದೃಷ್ಟಿ ಇದೆ.

(b) ಮಹಾತ್ಮಾಜಿಯ ಪ್ರೀತಿಯ ಶ್ಲೋಕಗಳು ಸ್ಥಿತಪ್ರಜ್ಞನ ಕುರಿತಾದುವು. ಅವುಗಳಲ್ಲಿ ಮೊದಲನೇ ಶ್ಲೋಕದಲ್ಲಿಯೂ (ಪ್ರಜಹಾತಿ ಯದಾ ಕಾಮಾನ್ ಸರ್ವಾನ್) ಆಖೈರ ಶ್ಲೋಕದಲ್ಲಿಯೂ (ವಿಹಾಯ ಕಾಮಾನ್ ಸರ್ವಾನ್) ಎಂದಿದೆ. ಅಂದರೆ ಆಶೆಯನ್ನು ನಿಶ್ಶೇಷ ತೊರೆಯಬೇಕು.

(c) ಈ ಸಂದರ್ಭದಲ್ಲಿ ಶಿವಾಜಿಯ ಕುರಿತು ಒಂದು ಕಥೆ ಇದೆ. ಆತನ ಸರದಾರನು ಓರ್ವ ಸುಂದರ ಮುಸ್ಲಿಂ ಸ್ತ್ರೀಯನ್ನು ಅಂದರೆ ಯುದ್ಧದಲ್ಲಿ ಗೆದ್ದವನ ಪತ್ನಿಯನ್ನು ಮಹಾರಾಜನಿಗೆ ಆಗಿನ ಪದ್ಧತಿಯಂತೆ ಉಡುಗೊರೆಯಾಗಿ ಕಳುಹಿಸಿದನು. "ನಿನ್ನಂತೆಯೇ ನನ್ನ ತಾಯಿಯು ಸುಂದರಳಾಗಿದ್ದರೆ ನಾನು ಕೂಡ ಚೆಲುವನಾಗುತಿದ್ದೆ" ಎಂದು ಆಕೆಗೆ ಹೇಳಿ, ಅವಳನ್ನು ಕಾವಲು ಸಮೇತ ಗಂಡನಿಗೆ ಒಪ್ಪಿಸಿದನು.

೬. (a) ಆತನ ನಾಲಿಗೆಯಿಂದ ಅಸತ್ಯಬಾರದು.

b) ಪರಧನಕ್ಕೆ ಕೈಹಾಕನು.

(a) ಪರಮಾತ್ಮನು ಸತ್ಯಸ್ವರೂಪಿಯಾಗಿರುತ್ತಾ ವೈಷ್ಣವನ ಬಾಯಿಯಿಂದ ಅಸತ್ಯ ಹೇಗೆ ಬಂದೀತು?

(b) ಶ್ರೀ ರಾಮಕೃಷ್ಣ ಪರಮಹಂಸರು ಪದೇ ಪದೇ ಕೊಡುವ ಉಪದೇಶ—'ಕಾಮಿನಿ ಕಾಂಚನ ತೊರೆಯಿರಿ' ಎಂದಾಗಿತ್ತು. ಕಾಮ ಇದ್ದಲ್ಲಿ ರಾಮನಿಲ್ಲ.

೭. (a) ಅವನನ್ನು ಮೋಹ ಮಾಯೆಗಳು ವ್ಯಾಪಿಸುವುದಿಲ್ಲ.

(b) ಅವನ ಮನಸ್ಸಿನಲ್ಲಿ ದೃಢ ವೈರಾಗ್ಯವಿರುವದು.

(a) ವಸ್ತುಸ್ಥಿತಿಯನ್ನು ಇದ್ದಂತೆ ತಿಳಿಯದಿರುವದು. ಮೋಹಿ ಅರ್ಜುನನಿಗೆ ಮೋಹವು ಆವರಿಸಿತ್ತು. ತಾನು 'ಧರ್ಮಸಮ್ಮೂಢಚೇತ'ನೆಂದು ಹೇಳುತ್ತಾನೆ ಮಾಯೆಯು ಗುಣಮಯಿ ಅಂದರೆ ಸತ್ವ ರಜ ತಮಗಳೆಂಬ ಗುಣಭರಿತಳು. 'ಮಾಮೇವಯೆ ಪ್ರಪದ್ಯಂತೆ ಮಾಯಾ ಮೇತಾಂತರ ಅತಿತೇ' ಗೀತಾ vii—14. (ನನ್ನನ್ನು ಶರಣು ಹೊಂದಿದವರು ಮಾಯೆಯನ್ನು ದಾಟುವರು).

(b) ಪರಮಾತ್ಮನಲ್ಲಿ ಮನಸ್ಸು ನೆಟ್ಟಿರುವನ್ನು ಕಾಲ ಇತರ ವಸ್ತುವಿನಲ್ಲಿ ಆಸಕ್ತಿ ಇರದು. 'ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ'-ಗೀತಾ II, 59.

೮. (a) ರಾಮನಾಮದಲ್ಲಿ ದೃಢಭಕ್ತಿ ಇರುವವನು ತಲ್ಲೀನನಾಗುವನು.

(b) ಅವನಲ್ಲಿ ಎಲ್ಲಾ ತೀರ್ಥಗಳು ವಾಸಿಸಿರುವವು.

(a) ಕವಿಯ ಜೀವನದಲ್ಲಿ ಒಂದು ದೃಷ್ಟಾಂತವಿದೆ. ಆತನು ಹಿರಿಯರ ಶ್ರಾದ್ಧಕ್ಕಾಗಿ ಸಾಮಗ್ರಿ ಬಗ್ಗೆ ಅಂಗಡಿ ಬೀದಿಗೆ ಹೋದಾಗ್ಯೆ ಅಲ್ಲಿ ಯಾರೋ ಒಬ್ಬರು ಪಾರಮಾರ್ಥಿಕ ವಿಷಯವನ್ನೆತ್ತಿದ್ದರು. ನರಸಿಂಹ ಮೇಥಾನು ಎಲ್ಲವನ್ನೂ ಮರೆತು ಹೊತ್ತಿನ ಪರಿವೆ ಇಲ್ಲದೆ ತಲ್ಲೀನನಾದನು. ಇಲ್ಲಿ ವಿಷ್ಣುವೇ ನರ್ಸಿಯ ವೇಷದಲ್ಲಿ ಶ್ರಾದ್ಧ ಪೂರೈಸಿದನು.

(b) ಆತನು ಸದಾ ವಿಷ್ಣುವಿನಲ್ಲಿ ರತನಾಗಿರುವದರಿಂದ ತದ್ರೂಪನಾಗುವನು. ಅವನ ಸಹವಾಸದಿಂದ ಮನುಷ್ಯನು ಪವಿತ್ರನಾಗುವನು. ತೀರ್ಥಯಾತ್ರೆ ಬೇರೆ ಬೇಡ. "ಸತ್ಯ ಸಂಗವದು ತೀರ್ಥ, ಉತ್ತಮರ ನಡೆ ತೀರ್ಥ, ಹರಿವ ನೀರೆತ್ತಣದು ತೀರ್ಥ ಸರ್ವಜ್ಞ."

೯. (a) ಅವನಲ್ಲಿ ಲೋಭ ಕಪಟಗಳು ಇರವು.

(b) ಕಾಮಕ್ರೋಧಗಳ ಸ್ಮರಣೆಯೂ ಇರದು.

(a) ಅವನ ಲೋಭವು ಪರಮಾತ್ಮನಲ್ಲಿರುತ್ತಾ ಅವನಿಗೆ ಬೇರೆ ವಸ್ತುಗಳಲ್ಲಿ ಲೋಭವಿರದು. ಇವರ ವಿಪರೀತ ದೃಷ್ಟಾಂತಗಳೆರಡು ಇವೆ. ಘುಜ್ನಿ ಮಹಮ್ಮದನು ತಾನು ಲೋಭದಿಂದ ಗಳಿಸಿಟ್ಟ ಧನದ ರಾಶಿಯನ್ನು ಮರಣಕಾಲದಲ್ಲಿ ತನ್ನ ಮುಂದಿರಿಸಿ ತಾನು ಇದನ್ನು ಬಿಟ್ಟು ಹೋಗಬೇಕಲ್ಲಾ ಎಂದು ಅತ್ತನು. ಸಾಮ್ರಾಟ ಸಿಕಂದರ (ಅಲೆಕ್ಸಾಂಡರನು) ತನ್ನ ಶವವನ್ನು ಸ್ಮಶಾನಕ್ಕೆ ಒಯ್ಯುವಾಗ ಎರಡು ಕೈಗಳನ್ನೂ ಹೊರಗಿಡಬೇಕು. ಜನರು ತಾನು ಬರಿಕೈಯಲ್ಲಿ ಹೋಗುತ್ತೇನೆಂಬುದನ್ನು ತಿಳಿಯಲಿ" ಎಂದನು. ಸತ್ಯದ ಉಪಾಸಕನಲ್ಲಿ ಕಪಟವಿರದು. ಇದು ಸಹಜ.

(b) ಕಾಮ, ಕ್ರೋಧ, ಲೋಭಗಳು ನರಕದ ಮೂರು ದ್ವಾರಗಳೆಂದು ಪರಮಾತ್ಮನು ಹೇಳಿದ್ದಾನೆ. ಗೀತಾ VXI—21. ಕಾಮಕ್ರೋಧಗಳು ಪಾಪದ ಬೀಜವೆಂದೂ ಹೇಳಿದೆ III—37.

೧೦. ಅಂಥವನ ದರ್ಶನದಿಂದ ಎಪ್ಪತ್ತೊಂದು ಕುಲಗಳು ಉದ್ಧರಿಸಲ್ಪಡುವುವು. ಇದಕ್ಕೆ ಮಹಾತ್ಮಾಜೀಯವರೇ ಸಾಕ್ಷಿ. ಅವರ ದರ್ಶನದಿಂದ ಸಾವಿರಾರು ಕುಲಗಳು ಪವಿತ್ರವಾದುವು.

ತಾತ್ಪರ್ಯ: ಭಗವಂತನ ನಾಮಸ್ಮರಣೆಯೊಂದು ಸದಾ ಮನಸ್ಸಿನಲ್ಲಿ ನೆಲಸಿದ್ದರೆ ಆತನ ಮೂರ್ತಿಯು ಅಂತರ್ಯದಲ್ಲಿದ್ದರೆ ಅದೊಂದು ಬೀಜಮಂತ್ರವಾಗಿ ಅದರಿಂದ ಕ್ರಮವಾಗಿ ಬೇರೆ ಎಲ್ಲ ಸದ್ಗುಣಗಳು ಬೆಳೆಯುವುವು. ಇದೇ ಜಪದ ಮಹಿಮೆ. "ಯಜ್ಞಾನಾಂ ಜಪಯಜ್ಞೋಽಸ್ಮಿ". ಗೀತಾ X—25.

■■■■■■■■■

# ಪರಮಾತ್ಮನ ಭಕ್ತರು ಯಾರು?

[“ವೈಷ್ಣವ ಜನತೋ” ಹಾಡಿನ ಸರಳಾನುವಾದವನ್ನು ಮಹಾತ್ಮರ ಲೇಖನದಿಂದ ಇಲ್ಲಿ ಆಯ್ದು ಕೊಟ್ಟಿರುವೆವು]

ಅವರು ಪರರ ಕಷ್ಟ ದುಃಖಗಳನ್ನು ತಿಳಿದುಕೊಳ್ಳುತ್ತಾರೆ; ಪರರಿಗೆ ಕಷ್ಟಕಾಲದಲ್ಲಿ ಉಪಕಾರಮಾಡುತ್ತಾರೆ; ಆದರೂ ತಾವು ಉಪಕಾರ ಮಾಡಿರುವೆವು ಎಂಬ ಅಭಿಮಾನವನ್ನು ಇಟ್ಟುಕೊಳ್ಳುವುದಿಲ್ಲ. ಜಗತ್ತಿನಲ್ಲಿಯ ಪ್ರತಿಯೊಬ್ಬರೊಡನೆಯೂ ವಿನಯದಿಂದ ನಡೆಯುತ್ತಾರೆ. ಯಾರೊಬ್ಬರದೂ ನಿಂದೆಮಾಡುವುದಿಲ್ಲ. ನಾಲಗೆಯನ್ನೂ, ಇಂದ್ರಿಯಗಳನ್ನೂ, ಮನಸ್ಸನ್ನೂ ಅಡ್ಡಮಾರ್ಗಕ್ಕೆ ಹೋಗಗೊಡದೆ, ಸ್ಥಿರವಾಗಿ ಇಟ್ಟುಕೊಳ್ಳುತ್ತಾರೆ. ನಿಜವಾಗಿಯೂ ಇಂಥ ಸತ್ಪುತ್ರರನ್ನು ಪಡೆದ ತಾಯಿಯು ಪುಣ್ಯವಂತೆಯು. ಅವರು ಸರ್ವತ್ರ ಸಮದೃಷ್ಟಿಯಿಂದಿರುತ್ತಾರೆ; ಆಶಾಪಾಶವನ್ನು ಹರಿದೊಗೆದಿರುತ್ತಾರೆ; ಪರಸ್ತ್ರೀಯರನ್ನು ತಾಯಿಯಂತೆ ಕಾಣುತ್ತಾರೆ; ನಾಲಗೆಯು ಹರಿದು ಬಿದ್ದರೂ ಸುಳ್ಳನ್ನು ಆಡುವುದಿಲ್ಲ; ಪರರ ಹಣಕ್ಕೆ ಸ್ಪರ್ಶಕೂಡ ಮಾಡುವುದಿಲ್ಲ. ಅವರಿಗೆ ಮೋಹಮಾಯೆಯು ಬಂದು ಮುಸುಕು ಹಾಕುವುದಿಲ್ಲ. ಅವರ ಮನಸ್ಸಿನಲ್ಲಿ ಸದಾ ವೈರಾಗ್ಯವೃತ್ತಿಯು ದೃಢಮೂಲವಾಗಿರುತ್ತದೆ; ಪರಮಾತ್ಮನ ಧ್ಯಾನದಲ್ಲಿ ತನ್ಮಯರಾಗಿ ಇರುತ್ತಾರೆ. ಎಲ್ಲ ಪವಿತ್ರವಾದ ತೀರ್ಥಕ್ಷೇತ್ರಗಳೂ ಅವರ ಹೃದಯದಲ್ಲಿಯೇ ಸಮಾವೇಶ ಹೊಂದಿರುತ್ತವೆ. ಅವರಲ್ಲಿ ಲೋಭವೂ ಇರುವುದಿಲ್ಲ; ಕಪಟವೂ ಇರುವುದಿಲ್ಲ. ಕಾಮ-ಕ್ರೋಧಗಳನ್ನಂತೂ ಅವರು ಬಿಟ್ಟುಬಿಟ್ಟಿರುತ್ತಾರೆ. ಇಂಥವರನ್ನು ಸರಿಯಾಗಿ ತಿಳಿದುಕೊಂಡು ನಡೆದರೆ ಇಡೀ ಮಾನವ ಜನಾಂಗವೇ ಉದ್ಧಾರವಾಗಬಹುದು.

—ಮಹಾತ್ಮಾಗಾಂಧಿ.

▪▪▪▪▪▪▪▪▪

# ಭಾರತ ಮತ್ತು ಅಹಿಂಸೆ

ಮನುಷ್ಯಜಾತಿಯು ಪರಸ್ಪರ ವೈರತ್ವವನ್ನು ಬಿಟ್ಟು, ಪ್ರೇಮಮಯವಾಗುವ ಕಾಲವು ಎಂದೂ ಬರಲಾರದೆಂದು ಅನೇಕ ಪ್ರಖ್ಯಾತ ಪಾಶ್ಚಾತ್ಯ ಲೇಖಕರೂ ಭಾರತದ ಪ್ರಸಿದ್ಧ ಲೇಖಕರೂ ಹೇಳುತ್ತಾರೆ. ಈ ಮಾತನ್ನು ನಾನು ಒಪ್ಪುವುದಿಲ್ಲ. ಇದಕ್ಕೆ ವಿರೋಧವಾಗಿ ನಾನು ಹೀಗನ್ನುತಿದ್ದೇನೆ: ಮನುಷ್ಯನು ವೈರತ್ವವನ್ನು ಬಿಟ್ಟುಕೊಟ್ಟಹೊರತು ಅವನಲ್ಲಿ ಮನುಷ್ಯತ್ವವೇ ಬರಲಾರದು; ಅವನು ನಿಜಪದವನ್ನು ಮುಟ್ಟಲಾರನು. ಸ್ವೇಚ್ಛೆಯಿದ್ದು ಅಥವಾ ಇಲ್ಲದೇ ನಾವು ಈ ಮಾರ್ಗದಿಂದಲೇ ನಡೆಯಬೇಕಾಗುವುದು. ಮುಂದೆ ನಿರುಪಾಯರಾಗಿ ಈ

ಮಾರ್ಗ ಹಿಡಿಯುವುದಕ್ಕಿಂತ, ಇಂದು ಸ್ವಸಂತೋಷದಿಂದಲೇ ಏಕೆ ಹಾಗೆ ಮಾಡ ಬಾರದು?

ಅಹಿಂಸೆಯಿಂದ ಪುಕ್ಕತನವು ಬರುವುದೆಂದು ಹೇಳುತ್ತಾರೆ. ಆದರೆ, ಭಾರತವು ಅಹಿಂಸಕವಾಗದಿದ್ದರೆ ನಾಶವಾಗುವುದು; ಅನ್ಯಪ್ರಜೆಗಳೂ ನಾಶವಾಗುವರು. ಏಕೆಂದರೆ, ದೊಡ್ಡ ಖಂಡದಂತಿರುವ ಭಾರತವು ಹಿಂಸಕವಾದರೆ ಅದು ಸಹ ಇತರ ಖಂಡಗಳಂತೆ ದುರ್ಬಲ ರಾಷ್ಟ್ರಗಳ ಮೇಲೆ ಬಲಾತ್ಕಾರ ನಡೆಸುವುದು. ಅದರ ಪರಿಣಾಮ ವೇನಾದೀತೆಂಬುದು ನೀವೇ ಕಲ್ಪಿಸಿಕೊಳ್ಳಿರಿ.

ನಾನು ಭಾರತವನ್ನು ಅಹಿಂಸೆಯ ಕಡೆಗೆ ಪರಿವರ್ತಿಸಿದರೆ, ಭಾರತವು ಇಡೀ ಜಗತ್ತಿಗೆ ಒಂದು ಚಮತ್ಕಾರ ಮಾಡಿ ತೋರಿಸಬಲ್ಲುದು. ಭಾರತವು ಅನ್ಯ ಪ್ರಜೆಗಳ ದಾಸ್ಯದ ಮೇಲೆ ಎದ್ದು ನಿಲ್ಲಬೇಕೆಂದು ನಾನು ಆಶಿಸುವುದಿಲ್ಲ. ಭಾರತವು ಆತ್ಮಬಲವನ್ನು ಸಂಪಾದಿಸಬೇಕು ಮತ್ತು ಬೇರೆ ಪ್ರಜೆಗಳನ್ನು ಬಲಿಷ್ಠರನ್ನಾಗಿ ಮಾಡಬೇಕು—ಎಂದು ನಾನು ಇಚ್ಛಿಸುತ್ತೇನೆ. ಬೇರೆ ದೇಶಗಳಿಗೆ ಪಶುಶಕ್ತಿಯ ಮಾರ್ಗವನ್ನು ನಾವು ತೋರಿಸತಕ್ಕದ್ದಲ್ಲ. ಆದುದರಿಂದ ಪಶುಶಕ್ತಿಯ ಮೇಲೆ ಅವಲಂಬಿಸಿರುವ ಯಾವುದೇ ರಾಜ್ಯಘಟನೆಯನ್ನು ನಾನು ಮಾನ್ಯಮಾಡಲಾರೆನು. ಇದು ನನ್ನ ದೃಢಸಿದ್ಧಾಂತವಾಗಿದೆ.

—ಮಹಾತ್ಮಾಗಾಂಧಿ.

▪▪▪▪▪▪▪▪

# ನಿಜವಾದ ಅಹಿಂಸೆ

ನಿರ್ದಯತೆಯ ಎದುರಿನಲ್ಲೇ ದಯೆಯ ಪರೀಕ್ಷೆಯಾಗಬಲ್ಲುದು. ಅದರಂತೆಯೇ, ಅಹಿಂಸೆಯ ಪರೀಕ್ಷೆಯು ಹಿಂಸೆಯ ಎದುರಿನಲ್ಲೂ, ಪ್ರೇಮದ ಪರೀಕ್ಷೆಯು ದ್ವೇಷದ ಎದುರಿನಲ್ಲೂ, ಸತ್ಯದ ಪರೀಕ್ಷೆಯು ಸುಳ್ಳಿನ ಎದುರಿನಲ್ಲೂ ಮಾತ್ರ ಸರಿಯಾಗಿ ಆಗಬಲ್ಲುದು. ಈ ಮಾತು ನಿಜವಾದರೆ, ಕೊಲೆಪಾತಕಿಯ ಮುಂದೆ ಅಹಿಂಸೆಯು ನಿರರ್ಥಕವೆನ್ನುವುದು ಅಸಮಂಜಸವಾದದ್ದು.

ಕೊಲೆಪಾತಕಿಯ ಮುಂದೆ ಅಹಿಂಸೆಯ ಪ್ರಯೋಗಮಾಡುವವನು ಆತ್ಮಬಲಿದಾನ ಮಾಡಬೇಕಾಗುವುದೆಂದು ಬೇಕಾದರೆ ಹೇಳಬಹುದು. ಆದರೆ, ನಿಜವಾಗಿ ಇದುವೇ ಅಹಿಂಸೆಯ ಪರೀಕ್ಷೆಯಾಗಿದೆ. ಇದರಲ್ಲಿಯ ವೈಶಿಷ್ಟ್ಯವೆಂದರೆ, ನಿರುಪಾಯನಾಗಿ ಜೀವಬಿಡುವವನು ಅಹಿಂಸೆಯ ಪರೀಕ್ಷೆಯಲ್ಲಿ ತೇರ್ಗಡೆ ಹೊಂದುವುದಿಲ್ಲ. ಸಾಯುವಾಗ ಸಹ ಕೊಲೆಪಾತಕಿಯ ಮೇಲೆ ಸಿಟ್ಟುಮಾಡದವನು ಮತ್ತು ಅವನ ಬಗ್ಗೆ ಕ್ಷಮೆಯನ್ನೇ ಬೇಡುವವನು ಮಾತ್ರ ಅಹಿಂಸಕನು.

ಇತಿಹಾಸವು ಯೇಸುಕ್ರಿಸ್ತನ ಬಗ್ಗೆ ಹೀಗೆಯೇ ಹೇಳುತ್ತದೆ. ತನ್ನನ್ನು ಶೂಲಕ್ಕೆ ಏರಿಸಿದವರ ಬಗ್ಗೆ, ತಾನು ಸಾಯುತ್ತಿರುವಾಗಲು ಸಹ, "ಹೇ ದೇವ! ನನ್ನನ್ನು ಶೂಲಕ್ಕೆ ಏರಿಸಿದವರನ್ನು ಕ್ಷಮಿಸು!" ಎಂದೇ ಅವನು ಬೇಡಿಕೊಂಡನು. ಇಂಥ ಉದಾಹರಣೆಗಳು ಇತರ ಎಲ್ಲ ಧರ್ಮಗಳಲ್ಲಿಯೂ ಸಿಗುತ್ತವೆ. ಆದರೆ, ಕ್ರಿಸ್ತನ ಈ ವಚನವು ಮಾತ್ರ ಜಗತ್ಪ್ರಸಿದ್ಧವಾಗಿದೆ.

ನಮ್ಮ ಅಹಿಂಸೆಯು ಈ ಮೇಲಿನ ಪರಮಾವಧಿಗೆ ಹತ್ತದಿರಬಹುದು. ಆ ಮಾತು ಬೇರೆ. ನಮ್ಮ ದೌರ್ಬಲ್ಯದ ಮೂಲಕ ಇಲ್ಲವೇ ಅನನುಭವದ ದೆಸೆಯಿಂದ ನಾವು ಅಹಿಂಸೆಯ ಭವ್ಯತೆಯನ್ನು ಕಡೆಗಣಿಸಬಹುದು. ನಮ್ಮ ತಿಳುವಳಿಕೆಯೇ ತಪ್ಪಿದ್ದರೆ, ನಾವು ಕೊನೆಯ ಗುರಿಗೆ ತಲಪಲು ಪ್ರಯತ್ನಪಡಲಾರೆವು. ಆದುದರಿಂದ, ಬುದ್ಧಿಯಿಂದಲಾದರೂ ಅಹಿಂಸೆಯ ಶಕ್ತಿಯನ್ನು ತಿಳಿದಿರುವುದು ಅವಶ್ಯವಿದೆ.

—ಮಹಾತ್ಮಾ ಗಾಂಧಿ.

▪▪▪▪▪▪▪▪▪

# ಶೂರರ ಅಹಿಂಸೆ

೧೯೨೪ನೆಯ ಇಸವಿ ಇರಬಹುದು, ಗುಜರಾಥದ ಪಂಚಮಹಾಲ ಜಿಲ್ಲೆಯಲ್ಲಿ ಹಿಂದೂ ಮುಸಲ್ಮಾನರಲ್ಲಿ ದಂಗೆಗಳೇಳುತ್ತಿದ್ದುವು. ಅಲ್ಲಿಯ ಕೆಲವು ಹಿಂದೂ ಜನರು ಓಡಿ, ಸಾಬರಮತಿಗೆ, ಗಾಂಧಿಜಿಯವರ ಕಡೆಗೆ ಬಂದರು; ಮತ್ತು ಮುಸಲ್ಮಾನರು ನಡೆಸಿರುವ ಅತ್ಯಾಚಾರದ ವರದಿಮಾಡಿದರು. ಇದನ್ನೆಲ್ಲ ದುಃಖದಿಂದ, ಆದರೂ ಶಾಂತವಾಗಿ ಕೇಳಿಕೊಂಡ ನಂತರ ಗಾಂಧಿಜಿಯವರು ಕೇಳಿದರು: "ಇದೆಲ್ಲವನ್ನು ಎದುರಿಸಲು ನೀವೇನು ಮಾಡಿದಿರಿ?"

"ನಾವೇನು ಮಾಡುವುದು? ನಿಮ್ಮ ಅಹಿಂಸೆಯು ನಮ್ಮ ಕೈಕಾಲುಗಳನ್ನೆಲ್ಲ ಕಟ್ಟಿಹಾಕಿದೆ. ಹೀಗಾಗಿ ನಾವು ಪೆಟ್ಟು ತಿಂದು ಇರಬೇಕಾಗಿ ಬಂತು."

ಈ ಉತ್ತರವನ್ನು ಕೇಳಿ ಗಾಂಧಿಜಿಯವರ ಮುಖವು ಕೆಂಪು ಕೆಂಪಾಯಿತು. ಅವರು ಗರ್ಜಿಸಿ ಹೇಳಿದರು: "ಇದೆಲ್ಲ ಸರಿಯೇ. ಆದರೆ ನೀವೆಲ್ಲ ಜನರು ಅಲ್ಲಿಂದ ಓಡಿ ಬಂದು ನನಗೆ ನಿಮ್ಮ ಹೇಡಿತನದ ವರದಿ ಮುಟ್ಟಿಸಬೇಕೆಂದೇನೂ ನನ್ನ ಅಹಿಂಸೆಯು ಹೇಳಲಿಲ್ಲ. ಇಂಥ ಪ್ರಸಂಗದಲ್ಲಿ ಎದುರಿಸಿ, ಅಗತ್ಯಬಿದ್ದರೆ ಜೀವ ಸಹ ಕೊಡಬೇಕೆಂದು ನನ್ನ ಅಹಿಂಸೆಯು ಹೇಳುತ್ತದೆ. ನಿಮ್ಮಲ್ಲಿ ಈ ರೀತಿ ಜೀವ ಕೊಡುವ ಧೈರ್ಯವಿಲ್ಲದಿದ್ದರೆ, ನೀವು ನಿಮ್ಮ ತಿಳುವಳಿಕೆಯ ಪ್ರಕಾರ ಈ ಪರಿಸ್ಥಿತಿಯನ್ನು ಎದುರಿಸಬೇಕಾಗಿತ್ತು. ಆದರೆ, ನೀವು ನನ್ನ ವಿಚಾರಗಳನ್ನು ಸರಿಯಾಗಿ ತಿಳಿದುಕೊಳ್ಳಲೂ ಇಲ್ಲ; ಮತ್ತು ನಿಮ್ಮ ತಿಳುವಳಿಕೆಯ ಪ್ರಕಾರ ನಡೆ

ಯುವ ಸಾಹಸವೂ ನಿಮ್ಮಲ್ಲಿಲ್ಲ. ಅಂದ ಮೇಲೆ ನಿಮ್ಮ ಈ ಅಳುಮೋರೆಗಳನ್ನು ತೋರಿಸಲು ಬರುವ ಆವಶ್ಯಕತೆಯಾದರೂ ಏನಿತ್ತು?"

▪▪▪▪▪▪▪▪

# ಹೆಣ್ಣುಮಕ್ಕಳು ಮತ್ತು ಅಹಿಂಸೆ

ಗುಜರಾಥ ವಿದ್ಯಾಪೀಠದ ಕೆಲವು ಹುಡುಗಿಯರು ಶ್ರೀ| ಕಿಶೋರಲಾಲ ಮಶ್ರೂವಾಲರ ಬಳಿಗೆ ಬಂದು ಕೇಳಿದರು: "ಹುಡುಗರು ಎಷ್ಟೋ ಸಲ ನಮ್ಮ ಬೆನ್ನು ಹತ್ತುತ್ತಾರೆ. ಆಗ ನಾವೇನು ಮಾಡಬೇಕು? ಅವರನ್ನು ಹೇಗೆ ಎದುರಿಸಬೇಕು?

ಕಿಶೋರಲಾಲಜಿಯವರು ಹೇಳಿದರು: "ನಿಮ್ಮ ಕಾಲುಗಳಲ್ಲಿ ಮೆಟ್ಟುಗಳಂತೂ ಇದ್ದೇ ಇರುತ್ತವಲ್ಲ? ಅವುಗಳಿಂದಲೇ ಅವರ ಪೂಜೆ ಮಾಡಿಬಿಡಿರಿ."

ಇದನ್ನು ಕೇಳಿ ಆ ಹುಡುಗಿಯರು ದಂಗುಬಡೆದು ಹೋದರು. ಅಹಿಂಸೆಯ ಮೂರ್ತಿಯಾದ ಕಿಶೋರಲಾಲಜಿಯವರು ಈ ರೀತಿ ಹಿಂಸಾಮಾರ್ಗವನ್ನು ಉಪದೇಶ ಮಾಡುವರೆಂದು ಅವರು ಎಂದೂ ನಂಬಿರಲಿಲ್ಲ. ಅವರು ಹೇಳಿದರು: "ಇದು ಹಿಂಸೆಯಲ್ಲವೇ? ಇದು ನಮಗೆ ತಿಳಿದಿದೆ, ಆದರೆ ನಮಗೆ ಅಹಿಂಸೆಯ ಉಪಾಯವನ್ನು ಹೇಳಿಕೊಡಿರಿ."

ಕಿಶೋರಲಾಲಜಿಯವರು ಹೇಳಿದರು: "ಒಳ್ಳೇದು ಈ ವಿಷಯದಲ್ಲಿ ನಿಮಗೆ ಸಂಶಯವಿದ್ದರೆ ಎಲ್ಲವೆ ಇದರಿಂದ ನಿಮಗೆ ಸಮಾಧಾನವಾಗುವುದಿಲ್ಲವಾದರೆ, ನೀವು ಗಾಂಧಿಜಿಯವರ ಬಳಿಗೆ ಹೋಗಿ ಅವರನ್ನೇ ಕೇಳಿಕೊಳ್ಳಿರಿ."

ಹುಡುಗಿಯರು ಗಾಂಧಿಜಿಯವರ ಬಳಿಗೆ ಹೋಗಿ ಈ ವಿಷಯವನ್ನು ತಿಳಿಸಿದರು. ಆಗ ಗಾಂಧಿಜಿಯವರು ಹೇಳಿದರು: "ಹೀಗೋ? ಕಿಶೋರಲಾಲಜಿಯವರು ಹೇಳಿದ್ದರು—ಅಷ್ಟೆ ಅಲ್ಲವೆ? ನಾನು ಇನ್ನೂ ಮುಂದರಿದು ಹೇಳುತ್ತೇನೆ—ಕೇಳಿರಿ. ಯಾರಾದರೂ ನಿಮ್ಮ ಮೇಲೆ ಬಲಾತ್ಕಾರ ಮಾಡಲು ಬಂದರೆ, ನಿಮ್ಮೊಡನೆ ಚೂರಿ ಮುಂತಾದುವು ಇದ್ದರೆ, ಅವರ ಹೊಟ್ಟೆಯನ್ನು ಚುಚ್ಚಿಬಿಡಿರಿ. ನಿಮ್ಮ ಮಟ್ಟಿಗೆ ಇದೇ ಅಹಿಂಸೆಯೆಂದು ನಾನು ತಿಳಿಯುತ್ತೇನೆ."

ತಾತ್ಪರ್ಯವಿಷ್ಟೆ: ಗಾಂಧಿಜಿಯವರು ಹೆಣ್ಣುಮಕ್ಕಳಿಗೆ ನಿರ್ಭಯತೆಯ ಶಿಕ್ಷಣವನ್ನು ಕೊಡಲು ಇಚ್ಛಿಸುತ್ತಿದ್ದರು. ನಿರ್ಭಯತೆಯೇ ನಿಜವಾದ ಅಹಿಂಸೆಯ ಲಕ್ಷಣವಾಗಿದೆ.

('ಲೋಕಜೀವನ'ದಲ್ಲಿ ಹರಿಭಾವು ಉಪಾಧ್ಯಾಯ)

▪▪▪▪▪▪▪▪▪

# ನನ್ನ ಕನಸಿನ ಸ್ವರಾಜ್ಯ

ಭಾರತವು ಎಲ್ಲ ತರದ ಪಾರತಂತ್ರ್ಯದಿಂದ ಮುಕ್ತವಾಗಬೇಕು; ಮತ್ತು ಅವಶ್ಯಬಿದ್ದರೆ ತಪ್ಪುಮಾಡುವಷ್ಟು ಸ್ವಾತಂತ್ರ್ಯವೂ ಅದಕ್ಕೆ ಇರಬೇಕು. ಇಂಥ ರಾಜ್ಯಘಟನೆಗಾಗಿ ಪ್ರಯತ್ನಪಡುವೆನು. ಅತಿ ಬಡವನಿಗೆ ಕೂಡ, "ಇದು ನನ್ನ ದೇಶ; ಇದನ್ನು ರೂಪಗೊಳಿಸುವ ಕಾರ್ಯದಲ್ಲಿ ನನ್ನದೂ ಅಂಗವಿದೆ," ಎಂದು ಅನಿಸಬೇಕು. ಉಚ್ಚವರ್ಗ, ನೀಚವರ್ಗ ಎಂಬುದು ಇರಲಾಗದು. ಎಲ್ಲ ಜಾತಿಗಳ ಜನರು ಸಂಪೂರ್ಣ ಬಂಧುಭಾವದಿಂದ ಇರಬೇಕು. ಅಸ್ಪೃಶ್ಯತೆ, ಹೆಂಡ ಕುಡುಕತನ, ಮೊದಲಾದ ಕಲಂಕಗಳಿಗೆ ಸ್ಥಾನವೇ ಇರಕೂಡದು. ಗಂಡಸರಿಗೆ ಇರುವಷ್ಟೇ ಅಧಿಕಾರ, ಅನುಕೂಲತೆಗಳು ಹೆಂಗಸರಿಗೂ ಇರಬೇಕು. ಮೂಕ ಜನತೆಯ ಹಿತ, ವಿಘಾತುಕವಲ್ಲದ ಯಾವತ್ತು ಅಧಿಕಾರಗಳಿಗೆ ಸಂರಕ್ಷಣೆ ದೊರೆಯಬೇಕು. ಇಂಥ ಭಾರತವನ್ನು ಕಟ್ಟಲು ಹೆಣಗುವೆನು. ಇದೇ ನನ್ನ ಕನಸಿನ ಸ್ವರಾಜ್ಯ. ಇದರಲ್ಲಿ ಒಂದು ಅಂಶವೂ ಕೂಡ ಕಡಮೆ ಆದರೆ ನನಗೆ ಸಮಾಧಾನವಿಲ್ಲ.

— ಮಹಾತ್ಮಾಗಾಂಧಿ.

▪▪▪▪▪▪▪▪▪

# ಹಳ್ಳಿಯ ಸ್ವರಾಜ್ಯ

ಹಳ್ಳಿಯ ಸ್ವರಾಜ್ಯವೆಂದರೆ ಪ್ರತಿಯೊಂದು ಹಳ್ಳಿಯೂ ಸಂಪೂರ್ಣ ಸ್ವಾಯತ್ತ ಘಟಕವಾಗಿರಬೇಕು—ಎಂದು ನನ್ನ ಅಭಿಪ್ರಾಯವಿದೆ. ತನ್ನ ಜೀವನಾವಶ್ಯಕ ವಸ್ತುಗಳಿಗಾಗಿ ಅದು ನೆರೆಹೊರೆಯವರ ಮೇಲೆ ನೋಡಬಾರದು. ಪರಾವಲಂಬನ ಅವಶ್ಯವಿರುವಂಥ ಇತರ ಕೆಲವು ವಿಷಯಗಳಲ್ಲಿ ಅವಲಂಬನವು ಪರಸ್ಪರವಿರಬೇಕು. ಇದಕ್ಕೆ ತನಗೆ ಬೇಕಾಗುವಷ್ಟು ಆಹಾರಧಾನ್ಯ ಹಾಗೂ ಬಟ್ಟೆಗಾಗಿ ಹತ್ತಿಯನ್ನು ಬೆಳೆದುಕೊಳ್ಳಬೇಕಾದುದು ಹಳ್ಳಿಯ ಮೊಟ್ಟ ಮೊದಲನೆಯ ಕರ್ತವ್ಯ. ಹಳ್ಳಿಯ ದನಗಳಿಗೆ ಮೇಯಲು ಅಡವಿ ಹಾಗು ಹಿರಿಯರಿಗೂ ಚಿಕ್ಕಮಕ್ಕಳಿಗೂ ಮನಸರಂಜನೆಯ ಹಾಗೂ ಆಟದ ಬಯಲುಗಳು ಅವಶ್ಯವಿವೆ. ಹೆಚ್ಚಿಗೆ ಭೂಮಿ ಲಭ್ಯವಿದ್ದರೆ ಅಲ್ಲಿ ಉಪಯುಕ್ತ ರೊಕ್ಕದ ಬೆಳೆಗಳನ್ನು (ಗಾಂಜಾ, ತಂಬಾಕು, ಅಫೀಮು, ಮುಂತಾದುವುಗಳನ್ನು ಬಿಟ್ಟು) ಬೆಳೆಸಬಹುದು.

ಪ್ರತಿಯೊಂದು ಹಳ್ಳಿಯಲ್ಲಿ ನಾಟ್ಯಮಂದಿರ, ಶಾಲೆ, ಹಾಗೂ ಸಾರ್ವಜನಿಕ ಸಭಾಗೃಹಗಳು ಇರಬೇಕು. ನೀರಿನ ಪೂರೈಕೆಗಾಗಿಯೂ ವ್ಯವಸ್ಥೆಯಿರಬೇಕು. ಇದು ಸಾಧ್ಯವಾಗಬೇಕಾದರೆ, ಕೆರೆಬಾವಿಗಳ ಮೇಲೆ ನಿಯಂತ್ರಣವಿರಬೇಕು. ಸಂಪೂರ್ಣ ಮೂಲ ಶಿಕ್ಷಣವು ಖಡ್ಡಾಯವಾಗಿ ದೊರೆಯಬೇಕು. ಎಲ್ಲ ಚಟು

ಪಟಿಕೆಗಳು ಸಾಧ್ಯವಿದ್ದಷ್ಟು ಸಹಕಾರೀ ತಳಹದಿಯ ಮೇಲೆ ಸಾಗಬೇಕು. ಮೇಲು—ಕೀಳೆಂಬ ಭೇದಭಾವ ಇರಬಾರದು.

—ಮಹಾತ್ಮಾಗಾಂಧಿ.

■■■■■■■■■

# ರಾಮರಾಜ್ಯವು ಹೇಗಿರಬೇಕು?

ರಾಮರಾಜ್ಯದಲ್ಲಿ ಹಳ್ಳಿಯೇ ಗಣ್ಯ ಸಂಖ್ಯೆ ಆಗಿರಬೇಕು. ಹಳ್ಳಿಯು ನನ್ನ ಮುಖ್ಯ ಅವಶ್ಯಕತೆಗಳ ವಿಷಯದಲ್ಲಿ ಸ್ವಾವಲಂಬಿಯಾಗಿಯೂ, ಸ್ವಯಂಪೂರ್ಣವಾಗಿಯೂ, ಸ್ವತಂತ್ರವಾಗಿಯೂ ಇರಬೇಕು. ಸ್ವಾವಲಂಬನ ಮತ್ತು ಸ್ವಾತಂತ್ರ್ಯಕ್ಕೆ ಭಂಗಬಾರದಂತೆ, ನೆರೆಹೊರೆಯ ಪ್ರದೇಶಗಳ ಸಂಗಡ ಪರಸ್ಪರ ಸಹಕಾರ ಮತ್ತು ಪರಸ್ಪರಾವಲಂಬನದಲೇ ಮಾತ್ರ ಸಾಧಿಸಬಹುದಾದ ವ್ಯವಹಾರಗಳನ್ನು ನಿರ್ವಹಿಸಬೇಕು. ಪ್ರತಿಯೊಂದು ಹಳ್ಳಿಯಲ್ಲಿ ಧಾನ್ಯ, ಹಣ್ಣಿನ ಗಿಡ, ತರಕಾರಿ, ಮತ್ತು ಹತ್ತಿಯು ಸಲುವಾಗಿ ಸಾಕಷ್ಟು ಭೂಮಿ ಇರಲೇಬೇಕು; ಮತ್ತು ಅದನ್ನು ಚೆನ್ನಾಗಿ ಸಾಗುಮಾಡುವ ಬಗ್ಗೆ ಅವಶ್ಯವಿರುವ ಎಲ್ಲ ಸಾಧನೆಗಳು ಇರಬೇಕು. ಮೇಲಾಗಿ ದನಕರುಗಳ ಬಗ್ಗೆ ಗೋಚರಾವು ಭೂಮಿ, ಹಿರಿಯರ-ಕಿರಿಯರ ಆಟ-ವಿನೋದಾವಳಿಯ ಬಗ್ಗೆ ಬೈಲುಗಳು ಮತ್ತು ವನವಿಹಾರಕ್ಕೋಸ್ಕರ ತೋಟ, ಇವುಗಳೂ ಇರಬೇಕು. ಊರಿನಲ್ಲಿ ಅವಶ್ಯವಿರುವಷ್ಟು ಕೆರೆ-ಬಾವಿಗಳು ಇರಬೇಕು. ಅವುಗಳಲ್ಲಿ ಸಾಕಷ್ಟು ನೀರು ಇರುವಂತೆಯೂ ಮತ್ತು ಆ ನೀರಿನ ದುರುಪಯೋಗವಾಗದಂತೆಯೂ ನೋಡಿಕೊಳ್ಳುವ ವ್ಯವಸ್ಥೆಯಿರಬೇಕು. ಹಳ್ಳಿಯ ಪ್ರಜೆಗಳ ಈ ಯಾವತ್ತೂ ಆರ್ಥಿಕ ಪ್ರವೃತ್ತಿಗಳು ಸಾಧ್ಯವಿರುವ ಮಟ್ಟಿಗೆ ಸಹಕಾರೀ ಧೋರಣೆಯಿಂದಲೇ ನಡೆಯುತ್ತಿರಬೇಕು.

(ಮಹಾತ್ಮರ ತತ್ತ್ವಗಳನ್ನನುಸರಿಸಿ)

—ದಿಲ್‌ಖುಶ್ ದಿವಾನಜಿ.

■■■■■■■■■

# ಒಳಿತು ಮತ್ತು ಕೇಡುಗಳ ಆಯುಷ್ಯ

ಸತ್ಪುರುಷರ ಕಾರ್ಯದ ನಿಜವಾದ ಆರಂಭವು ಅವರ ಮರಣದ ನಂತರವೇ ಆಗುವುದೆಂದು ನನ್ನ ವಿಶ್ವಾಸವಿರುತ್ತದೆ. ‘‘ಮನುಷ್ಯನ ಒಳ್ಳೆಯ ಕೆಲಸಗಳಲ್ಲಿ ಹೆಚ್ಚಿನವು ಅವನ ಸಂಗಡವೇ ಸುಟ್ಟುಹೋಗುತ್ತವೆ; ಮತ್ತು ಕೆಟ್ಟ ಕೆಲಸಗಳು ಹಿಂದುಳಿಯುತ್ತವೆ,” ಎಂದು ಶೇಕ್ಸ್‌ಪಿಯರನು ಹೇಳಿದ ಮಾತು ನಿಜವಲ್ಲ. ಕೆಟ್ಟದ್ದರ ಆಯುಷ್ಯವು ಎಂದೂ ಹೆಚ್ಚಿಗೆ ಇರುವುದಿಲ್ಲ.

ರಾಮನು ಜೀವಂತನಾಗಿ ಇದ್ದಾನೆ; ಮತ್ತು ಅವನ ಹೆಸರಿನಿಂದ ನಾವು ಪವಿತ್ರರಾಗುತ್ತೇವೆ. ರಾವಣನು ಹೋಗಿಬಿಟ್ಟ; ಮತ್ತು ತನ್ನಲ್ಲಿಯ ಕೆಡುಕುಗಳನ್ನು

ಸಹ ತನ್ನ ಸಂಗಡವೇ ತೆಗೆದುಕೊಂಡು ಹೋದ. ಯಾವನೊಬ್ಬ ದುಷ್ಟ ಮನು ಷ್ಯನು ಕೂಡ ರಾವಣನ ಹೆಸರನ್ನು ನೆನಸುವುದಿಲ್ಲ.

ರಾಮನ ಕಾಲದಲ್ಲಿ ರಾಮನು ಹೇಗಿದ್ದನೆಂದು ಯಾರಿಗೆ ತಿಳಿದಿದೆ? ಆ ಕಾಲ ದಲ್ಲಿ ರಾಮನ ಮೇಲೆಯೂ ಅಪವಾದಗಳಿದ್ದುವು ಎಂದು ಕವಿಯು ಬರೆದಿಟ್ಟಿ ದ್ದಾನೆ. ಆದರೆ ಇಂದಿಗಾದರೂ ರಾಮನಲ್ಲಿಯ ನ್ಯೂನತೆಗಳೆಲ್ಲ ರಾಮನ ದೇಹದ ಸಂಗಡವೇ ಭಸ್ಮವಾಗಿ ಹೋದವು; ಮತ್ತು ನಾವು ಅವನನ್ನು ಅವತಾರಪುರುಷ ನೆಂದು ಪೂಜೆಮಾಡುತ್ತಿದ್ದೇವೆ. ರಾಮನ ರಾಜ್ಯವು ರಾಮನು ಜೀವಂತನಾಗಿ ದ್ದಾಗ ಕೂಡ ಇಂದಿನಷ್ಟು ವ್ಯಾಪಕವಾಗಿ ಇರಲಿಲ್ಲ.

ಇದು ಯಾವುದೇ ತತ್ತ್ವಜ್ಞಾನದ ಮಾತೆಂದು ನಾನು ಬರೆಯುತ್ತಿಲ್ಲ. ನಿಮ್ಮನ್ನು ಶಾಂತವಾಗಿ ಇರಿಸುವ ಉದ್ದೇಶದಿಂದಲೂ ಬರೆಯುತ್ತಿಲ್ಲ. ಆದರೆ ನಾನು ನಿರ್ಧಾರಪೂರ್ವಕವಾಗಿ ಹೇಳಲು ಇಚ್ಛಿಸುವುದೇನಂದರೆ: ನಾವು ಯಾರನ್ನು ಸತ್ಪುರುಷರೆಂದು ತಿಳಿಯುತ್ತೇವೆಯೋ ಅಂಥವರ ಮರಣದಿಂದ ಸ್ವಲ್ಪ ಕೂಡ ದುಃಖವನ್ನು ಮಾಡಕೂಡದು. ಮತ್ತು ಸತ್ಪುರುಷರ ನಿಜವಾದ ಅನುಭವ, ಇಲ್ಲವೆ ನಿಜವಾದ ಪರಿಣಾಮವು ಅವರ ಮರಣದ ನಂತರವೇ ಆಗುತ್ತದೆ, ಎಂಬ ವಿಷಯದಲ್ಲಿ ದೃಢವಾದ ವಿಶ್ವಾಸವನ್ನಿಟ್ಟಿರಬೇಕು. ಅವರು ಜೀವಂತರಾಗಿರುವಾಗ ಯಾವ ಯಾವ ಮಹತ್ಕಾರ್ಯಗಳನ್ನು ಅವರು ಮಾಡಿರುವರೆಂದು ಹೇಳುತ್ತಾ ರೆಯೋ ಅಂಥ ಮಹತ್ಕಾರ್ಯಗಳು ಕೂಡ ಇನ್ನು ಮುಂದೆ ಬರಬಹುದಾದ ಪರಿ ಣಾಮಗಳೊಡನೆ ತುಲನೆಮಾಡಿನೋಡಿದರೆ ಅಲ್ಪಮಾತ್ರವಾಗಿರುತ್ತವೆ. ಆದರೆ ನಮ್ಮ ಕಾಲಮಾನದಲ್ಲಿ ನಾವು ಯಾರನ್ನು ಸತ್ಪುರುಷರೆಂದು ತಿಳಿಯುತ್ತೇವೆಯೋ ಅವರ ಯಾವತ್ತೂ ಸಾಧುತನದ ಅನುಕರಣವನ್ನು ಸಾಧ್ಯವಾದಷ್ಟು ನಾವು ಕೂಡ ಮಾಡಲೇಬೇಕು. ಇದು ಮಾತ್ರ ನಮ್ಮ ಕರ್ತವ್ಯವಾಗಿದೆ.

— ಮಹಾತ್ಮಾಗಾಂಧಿ.

▪▪▪▪▪▪▪▪▪

# ನಿಯಮ ಪಾಲನೆ

ಆಶ್ರಮದಲ್ಲಿ ಎಷ್ಟೋಸಲ ಸಂಯುಕ್ತ ಭೋಜನದ ಪ್ರಯೋಗಗಳಾದುವು. ಕೌಟುಂಬಿಕ ಜೀವನದಿಂದ ಮುಂದೆ ಸಾಮಾಜಿಕ ಇಲ್ಲವೆ ಸಾಮೂಹಿಕ ಜೀವ ನದ ಕಡೆಗೆ ಪ್ರಗತಿ ಮಾಡಬೇಕೆಂದು ಗಾಂಧಿಜಿಯವರು ಹೇಳುತ್ತಿದ್ದರು ಇದು ಅವರ ರಾಮರಾಜ್ಯದ ಏಣಿಯ ಒಂದು ಮೆಟ್ಟಿಲೇ ಆಗಿತ್ತು. ಇದರ ಸಲುವಾಗಿ ಎಲ್ಲ ಜನರು ಒಂದೇ ಸ್ಥಳದಲ್ಲಿ ಆಶ್ರಮದ ಭೋಜನಾಲಯದಲ್ಲಿ ಊಟಮಾಡು ವುದು ಅವಶ್ಯವಿತ್ತು. ಇದರಿಂದ ಸಮಯ ಹಾಗೂ ಹಣ ಉಳಿಸಿಕೊಳ್ಳುವು ದಲ್ಲದೆ ಸಾಮೂಹಿಕ ಜೀವನದ ಅಭ್ಯಾಸವೂ ಆಗುವುದು. ಆದರೆ ಇದರ ಜತೆಗೆ

ನಿಯಮಿತತನ, ಸುವ್ಯವಸ್ಥೆ ಮತ್ತು ಸ್ವಚ್ಛತೆ ಇರಲೇಬೇಕು. ಈ ಎಲ್ಲ ಕಾರ್ಯಕ್ರಮಕ್ಕೆ ಗತಿಕೊಡುವುದಕ್ಕೆ ಹಾಗೂ ಇನರಿಗೆ ಪ್ರೋತ್ಸಾಹ ಕೊಡಲಿಕ್ಕೆ ಸ್ವತಃ ಗಾಂಧಿಜಿಯವರು ಸಂಯುಕ್ತ ಭೋಜನಾಲಯದಲ್ಲಿಯೇ ಊಟಮಾಡಹತ್ತಿದರು. ಊಟಕ್ಕೆ ಎರಡು ಸಾರಿ ಘಂಟೆ ಹೊಡೆಯಬೇಕೆಂದು ನಿಶ್ಚಯಿಸಲಾಯಿತು. ಎರಡನೇ ಗಂಟೆಯಾಗುವುದರೊಳಗೆ ಭೋಜನಾಲಯದ ಒಳಗೆ ಬಾರದವರು ಎರಡನೆಯ ಪಂಕ್ತಿಯ ಸಲುವಾಗಿ ಪಡಸಾಲೆಯಲ್ಲಿ ನಿರೀಕ್ಷಣೆಮಾಡುತ್ತ ನಿಲ್ಲಬೇಕಾಗುತ್ತಿತ್ತು. ಎರಡನೇ ಘಂಟೆ ಬಾರಿಸುತ್ತಲೇ ಭೋಜನಾಲಯದ ಬಾಗಿಲನ್ನು ಮುಚ್ಚಲಾಗುತ್ತಿತ್ತು. ಅದರಿಂದ ನಂತರ ಯಾರಿಗೂ ಒಳಗೆ ಬರಲಾಗುತ್ತಿದ್ದಿಲ್ಲ.

ಒಂದು ದಿನ ಗಾಂಧಿಜಿಯವರಿಗೆ ಬರಲಿಕ್ಕೆ ತಡವಾದದ್ದನ್ನು ನೋಡಿದೆನು. ಸಂಯೋಗವಶಾತ್ ಅಂದು ನನಗೂ ತಡವಾಗಿತ್ತು. ಗಾಂಧಿಜಿಯವರು ಪಡಸಾಲೆಯಲ್ಲಿ ನಿಂತಿರುವುದನ್ನು ನೋಡಿದೆನು. ಪಡಸಾಲೆಯಲ್ಲಿ ಕೂತುಕೊಳ್ಳಲು ಕುರ್ಚಿ ಅಥವಾ ಬೆಂಚು ಕೂಡ ಇಟ್ಟಿರಲಿಲ್ಲ. ನಾನು ತಡವಾಗಿ ಬಂದ ಸಂಕೋಚವನ್ನು ಅಡಗಿಸಿಕೊಳ್ಳುವುದಕ್ಕೆ ಗಾಂಧಿಜಿಯವರೊಡನೆ ವಿನೋದವಾಗಿ ಹೇಳಿದೆ: "ಈ ಹೊತ್ತು ತಾವು ಸಹ ಅಪರಾಧಿಗಳ ಪಂಜರದಲ್ಲಿ ನಿಂತಿದ್ದೀರಲ್ಲ!"

ಗಾಂಧಿಜಿಯವರು ಖೊಳ್ಳನೆ ನಕ್ಕು ಹೇಳಿದರು: "ಕಾಯದೆಯ ದೃಷ್ಟಿಯಲ್ಲಿ ಎಲ್ಲರೂ ಸಮಾನರೇ ಅಲ್ಲವೆ?"

"ತಮಗೆ ಕುಳಿತುಕೊಳ್ಳಲು ಒಂದು ಕುರ್ಚಿ ತರಲೆ?" ಎಂದು ನಾನು ವಿಚಾರಿಸಿದೆನು.

"ಬೇಡ, ಬೇಡ, ಶಿಕ್ಷೆಯನ್ನು ಸಂಪೂರ್ಣ ಅನುಭವಿಸಿಯೇ ತೀರಬೇಕು. ಅದರಲ್ಲಿಯೇ ನಿಜವಾದ ಆನಂದವಿದೆ," ಎಂದು ಗಾಂಧಿಜಿಯವರು ಹೇಳಿದರು.

—'ಜೀವನ ಸಾಹಿತ್ಯ'ದಲ್ಲಿ ಹರಿಭಾವು ಉಪಾಧ್ಯಾಯ.

▪▪▪▪▪▪▪▪

# ಮಹಾತ್ಮರ ವಾಣಿ

(ಮಹಾತ್ಮಾಗಾಂಧಿಜಿಯವರ ಲೇಖನಗಳಿಂದಲೂ ಭಾಷಣಗಳಿಂದಲೂ ಆಯ್ದುದು)

೧. ಕೈಕೊಂಡ ಕಾರ್ಯದಲ್ಲಿಯೇ ಮಗ್ನನಾಗಿದ್ದು, ಬೇರೊಂದರ ವಿಚಾರ ಸಹ ಮಾಡದವನ ಜೀವನವೇ ಧನ್ಯವಾದದ್ದು,—ಸಾರ್ಥಕವಾದದ್ದು.

೨. ತನ್ನ ಶಕ್ತಿಯ ಹೊರಗೆ ದುಡಿಯುವವನು ಅಭಿಮಾನಿಯು, ಅಶಕ್ತನು. ತನ್ನ ಶಕ್ತಿಗಿಂತ ಕಡಿಮೆ ದುಡಿಯುವವನು ಕಳ್ಳನು.

೩. ಆಚರಣವಿಲ್ಲದ ವಿಚಾರಗಳು ಎಷ್ಟು ಉತ್ತಮವಿದ್ದರೂ ಖೋಟಾ (ಕೃತಕ) ಮುತ್ತುಗಳಿದ್ದಂತೆ.

೪. ನಮ್ಮ ತಪ್ಪುಗಳನ್ನು ನಾವು ಒಪ್ಪಿಕೊಳ್ಳುವುದು ಅತೀ ಉತ್ತಮ. ಆದರಿಂದ ನಮ್ಮ ಬಲವು ನಿಶ್ಚಯವಾಗಿಯೂ ಹೆಚ್ಚಾಗುವದು.

೫. ಆತ್ಮಗೌರವ ಮತ್ತು ಮಾನ್ಯತೆಗಳು ಇತರರಿಂದ ರಕ್ಷಿಸಲ್ಪಡಲಾರವು. ಅವುಗಳು ಸ್ವತಃ ಪ್ರತಿಯೊಬ್ಬ ವ್ಯಕ್ತಿಯಿಂದ ರಕ್ಷಿಸಲ್ಪಡಬೇಕಾಗಿದೆ.

೬. ಪ್ರಾಣಿಮಾತ್ರದೊಡನೆ ನಮಗೆ ಐಕ್ಯತೆ ಅನಿಸದಿದ್ದರೆ, ನಾವು ಮಾಡುವ ಪ್ರಾರ್ಥನೆ, ಉಪವಾಸ, ಜಪ, ತಪ,—ಎಲ್ಲವೂ ನಿಷ್ಫಲ.

೭. ಹೊಲಸು ಪಾತ್ರೆಯಲ್ಲಿ ಹಾಕಿದ ಸ್ವಚ್ಛ ನೀರು ಸಹ ಹೊಲಸಾಗುತ್ತದೆ. ಅದರಂತೆ ಹೊಲಸು ಮನಸ್ಸಿನಲ್ಲಿ ಒಳ್ಳೆಯ ವಿಚಾರಗಳು ಸಹ ಹೊಲಸಾಗಿ ಬಿಡುತ್ತವೆ.

೮. ಮನಸ್ಸು ಅಶಾಂತವಾದ ನಂತರವೇ ಶರೀರವು ಅಸ್ವಸ್ಥವಾಗುತ್ತದೆ. ನಿಜವಾದ ಅಹಿಂಸೆಯಿರುವಲ್ಲಿ ಅಪಾರ ತಾಳ್ಮೆಯೂ ಆಂತರಿಕ ಶಾಂತಿಯೂ, ಒಳಿತು-ಕೆಡುಕಿನ ವಿವೇಕವೂ, ಆತ್ಮತ್ಯಾಗವೂ ನಿಜವಾದ ಜ್ಞಾನವೂ ಇದ್ದೇ ಇರುತ್ತದೆ.

೯. ಬಾಯಿಯಿಂದ "ರಾಮ ರಾಮ" ಎಂದ ಮಾತ್ರಕ್ಕೆ ರಾಮಭಕ್ತನಾಗುವುದಿಲ್ಲ "ಅನ್ನ ಅನ್ನ" ಎಂದ ಮಾತ್ರಕ್ಕೆ ಹೊಟ್ಟೆ ತುಂಬುವುದಿಲ್ಲ ಉಂಡರೆ ಮಾತ್ರ ಹೊಟ್ಟೆ ತುಂಬುವುದು.

೧೦. ತಪ್ಪು ಮಾಡುವುದು ಕೆಟ್ಟದ್ದು. ಆದುದರಿಂದ ಆ ಬಗ್ಗೆ ನಾಚಿಕೆ ಅನಿಸುತ್ತದೆ. ಮಾಡಿದ ತಪ್ಪಿನ ಬಗ್ಗೆ ಕ್ಷಮೆ ಬೇಡುವುದು ಒಳ್ಳೆಯ ಕೆಲಸ. ಆದುದರಿಂದ ಆ ಬಗ್ಗೆ ನಾಚಿಕೆ ಅನಿಸಬಾರದು. ಕ್ಷಮೆಬೇಡುವುದೆಂದರೆ. ''ತಿರಿಗಿ ತಪ್ಪುಮಾಡಲಿಕ್ಕಿಲ್ಲ'' ಎಂದು ನಿಶ್ಚಯಮಾಡುವುದು.

೧೧. ಈ ಜಗತ್ತಿನಲ್ಲಿ ನನಗೆ ನಾಚಿಕೆ ಅನಿಸುವುದು ಒಂದೇ ಒಂದು ಕೆಲಸಕ್ಕೆ—ಸುಳ್ಳು ವಿಚಾರ ಮಾಡಲಿಕ್ಕೆ, ಸುಳ್ಳು ಮಾತು ಆಡಲಿಕ್ಕೆ, ಸುಳ್ಳು ಆಚರಣೆ ಮಾಡಲಿಕ್ಕೆ.

೧೨. ಜನರೂ ಕಂಗಾಲಾಗಿದ್ದಾರೆ, ಜಾನುವಾರುಗಳೂ ಕಂಗಾಲ ಸ್ಥಿತಿಯಲ್ಲಿವೆ. ಅದರಂತೇ, ಧಾನ್ಯಾದಿ ಬೆಳೆಗಳೂ ಕಂಗಾಲಾವಸ್ಥೆಯಲ್ಲಿವೆ. ಇವರಲ್ಲಿ ಭೂಮಿಯದೇನೂ ದೋಷವಿಲ್ಲ. ಆಲಸ್ಯ ಮತ್ತು ಅಜ್ಞಾನ ಎಂಬ ಎರಡು ಹುಳಗಳೇ ನಮ್ಮನ್ನು ಕೊರೆದು ತಿನ್ನುತ್ತಲಿವೆ.

೧೩. ಬದುಕಿ ಇರುವುದೆಂದರೆ ತಿನ್ನುವುದು, ಉಣ್ಣುವುದು, ವಿನೋದ—ವಿಹಾರಗಳಲ್ಲಿ ತೊಡಗಿರುವುದು—ಅಷ್ಟೇ ಅಲ್ಲ. ಮನುಷ್ಯಮಾತ್ರರ ನಿಜವಾದಸೇವೆ ಮಾಡುವುದೇ ನಿಜವಾದ ಜೀವನ. ಅದಕ್ಕೇ ಪರಮಾತ್ಮನ ಸ್ತುತಿ ಎಂದು ಹೆಸರು.

೧೪. ಯಾರೊಬ್ಬರ ಹೆಗಲ ಮೇಲೆ ಹತ್ತಿ ಕೂತುಕೊಳ್ಳದಿರುವದು ಸಹ ಸೇವೆಯೇ ಸರಿ. ಇನ್ನೊಬ್ಬನಿಂದ ಸೇವೆ ತೆಗೆದುಕೊಳ್ಳದಿರುವುದು, ಅನ್ಯರಿಂದ ನಮ್ಮ ಕೆಲಸ ಮಾಡಿಕೊಳ್ಳದಿರುವ ವೃತ್ತಿಯನ್ನು ಇಟ್ಟುಕೊಳ್ಳುವುದು ಸಹ ಸೇವೆಯೇ ಸರಿ.

೧೫. ಪ್ರಾಮಾಣಿಕ ಶ್ರಮಮಾಡದ ಯಾವನೊಬ್ಬ ಮೈಗಳ್ಳನಿಗೆ ಪುಕ್ಕಟಿ ಅನ್ನ ಕೊಡುವುದು ನನ್ನ ಅಹಿಂಸೆಗೆ ಸಮ್ಮತವಿಲ್ಲ. ನಾನು ಸರ್ವಾಧಿಕಾರಿಯಾಗಿದ್ದರೆ, ಪುಕ್ಕಟೆ ಅನ್ನ ಹಂಚುವ ಅನ್ನ ಛತ್ರಗಳನ್ನೆಲ್ಲ ಮುಚ್ಚಿಸುವೆನು. ಇದರಿಂದ ರಾಷ್ಟ್ರದ ಅಧಃಪತನವಾಗಿದೆ. ಆಲಸ್ಯ, ಮೈಗಳ್ಳತನ, ಡಂಭ ಇತ್ಯಾದಿ ಪ್ರವೃತ್ತಿಗಳು ಬೆಳೆದಿವೆ.

೧೬. ನನ್ನ ಅಭಿಪ್ರಾಯದ ಪ್ರಕಾರ ಸಾಕಷ್ಟು ಅನ್ನ, ವಸ್ತ್ರ ಇಲ್ಲದೆ ಯಾರೊಬ್ಬರೂ ಉಳಿಯುವ ಪ್ರಸಂಗ ಬಾರದಂತೆ, ಭಾರತದ ಹಾಗೂ ಇಡೀ ಜಗತ್ತಿನ ಅರ್ಥವ್ಯವಸ್ಥೆಯಾಗಬೇಕು. ಅವಶ್ಯವಾದ ಯಾವತ್ತೂ ವಸ್ತುಗಳ ಮೇಲೆ ಸಾಮಾನ್ಯ ಜನತೆಯ ಹಕ್ಕು ಸ್ಥಾಪಿತವಾದಾಗಲೇ ಇಂಥ ಆದರ್ಶವು ನಿರ್ಮಾಣವಾಗುವುದು ಸಾಧ್ಯವಿದೆ. ಪರಮಾತ್ಮನು ಸೃಷ್ಟಿಸಿದ ಗಾಳಿ ಮತ್ತು ನೀರಿನಂತೆ ಯಾವತ್ತೂ ವಸ್ತುಗಳ ಮೇಲೆ ಯಾವತ್ತೂ ಜನರ ಅಧಿಕಾರವಿರಬೇಕು.

೧೭. ಸರಕಾರದ ನ್ಯೂನತೆಯನ್ನು ತೋರಿಸಿಕೊಡುವುದೆಂದರೆ ಲೋಕರಾಜ್ಯ ಸರಕಾರಕ್ಕೆ ಊಟವನ್ನು ಹಾಕಿದಂತೆ. ಆದರೆ, ವಿಧಾಯಕ ರೀತಿಯಲ್ಲಿ, ವಿವೇಕಯುಕ್ತವಾಗಿ ಮಾತ್ರ ದೋಷಗಳನ್ನು ತೋರಿಸಬೇಕು.

೧೮. ಕೊಡ ತುಂಬ ಹಾಲಿದ್ದರೂ, ಅದಕ್ಕೆ ಒಂದೇ ಹನಿ ವಿಷವನ್ನು ಕೂಡಿಸಿದರೆ ಕೆಡುತ್ತದೆ. ಅದರಂತೇ, ಒಂದೇ ಒಂದು ಅಸತ್ಯವು ಕೂಡ ಮನುಷ್ಯನನ್ನು ನಾಶಮಾಡುತ್ತದೆ.

೧೯. ಸ್ವರಾಜ್ಯದ ಅರ್ಥವಿಷ್ಟೇ: ಎರಡನೆಯವರ ಮೇಲಲ್ಲ — ನಮ್ಮ ಮೇಲೇ ನಾವು ರಾಜ್ಯ ನಡೆಸಿಕೊಳ್ಳುವುದು. ಅರ್ಥಾತ್, ನಮ್ಮ ಮೇಲೇ ನಾವು ನಿಯಂತ್ರಣವಿಟ್ಟುಕೊಳ್ಳುವುದು. ತನ್ನ ಇಂದ್ರಿಯಗಳನ್ನು ಜಯಿಸಿದವನು ಎಲ್ಲವನ್ನೂ ಜಯಿಸಿದಂತೆ.

೨೦. ಸಂತೋಷವು ಜ್ಞಾನದಲ್ಲೂ ಇಲ್ಲ, ಅಜ್ಞಾನದಲ್ಲೂ ಇಲ್ಲ. ಅದು ಪ್ರತಿಯೋರ್ವ ಮನುಷ್ಯನೊಳಗೆ ಮನೆಮಾಡಿಕೊಂಡಿದ್ದು, ಪೂರ್ಣತ್ವ ಮತ್ತು ಸತ್ಯಶೋಧನೆಯಿಂದ ದೊರೆಯುತ್ತದೆ.

೨೧. ನನ್ನನ್ನು ಭೇಟಿಯಾಗುವ ಪ್ರತಿಯೊಬ್ಬನೂ ನನ್ನ ಮುಖ ನೋಡುತ್ತಿರುವಾಗ ನನಗೆ ಕನ್ನಡಿಯ ಅವಶ್ಯಕತೆಯಿಲ್ಲ. (ಗಾಂಧಿಜಿಯವರು ಯಾವಾಗಲೂ ಕನ್ನಡಿಯಲ್ಲಿ ನೋಡುತ್ತಿರಲಿಲ್ಲ.)

೨೨. ದಿನಕ್ಕೆ ಆರುಗಂಟೆಗಳಿಗಿಂತ ಹೆಚ್ಚು ದುಡಿಯಬೇಡಿ. ಸಭೆಗಳಲ್ಲಾಗಲಿ ಮತ್ತೆಲ್ಲಿಯಾಗಲಿ ಗದ್ದಲಮಾಡಬೇಡಿ. ಮೆರೆವಣಿಗೆಗಳನ್ನು ನಡೆಸಬೇಡಿ. ಅತಿ ಭವ್ಯತೆಗೆ ಎಳಸಬೇಡಿ. ಒಂದು ದಿನದಲ್ಲಿ ಹತ್ತು ಹಲವು ಕಾರ್ಯಕ್ರಮಗಳನ್ನಿರಿಸಿಕೊಳ್ಳಬೇಡಿ. ಸಂಚಾರದ ಉದ್ದೇಶದ ದೃಷ್ಟಿಯಲ್ಲಿ—ಹಣಸಿಗದ ಮತ್ತು ಕೆಲಸವಿಲ್ಲದ ಕಡೆಗಳಿಗೆ ದೇಹವನ್ನೊಯ್ಯಬೇಡಿ. ಯಾರದಾದರೂ ಗೌರವ ಅಥವಾ ಕಾಂಕ್ಷೆ ತಣಿಸಲು ದೇಹವನ್ನೊಯ್ಯಬೇಡಿ. ದೇಹವನ್ನು ಕೇವಲ ಮಣ್ಣು ಎಂದು ತಿಳಿವಂಥ ತಪ್ಪು ಮಾಡಬೇಡಿ—ದೇಹವು ಮಣ್ಣು ಎನಿಸಿದರೂ, ಅದರೊಳಗಿರುವ ಚಿಕ್ಕ—ಸಚೇತನ ವಸ್ತುವೊಂದು ಈ ಮಣ್ಣಿನ ದೇಹಕ್ಕಾಗಿ ಮಾಡುವಂಥದೆಲ್ಲವನ್ನೂ ಸದಾ ನೋಡುತ್ತಲೇ ಇದೆ. (೧೯೨೯ರಲ್ಲಿ, ಆಂಧ್ರ ಸಂಚಾರಕಾಲದಲ್ಲಿ, ಮಹಾತ್ಮರ ಬಗ್ಗೆ ಹತ್ತು ಹಲವು ಕಾರ್ಯಕ್ರಮಗಳನ್ನು ಇರಿಸಿದ್ದಾಗ, ಮಹಾತ್ಮರು ಆ ವ್ಯವಸ್ಥಾಪಕರಿಗೆ ಬೋಧಿಸಿದ ಕೆಲವು 'ಬೇಡ'ಗಳು.)

೨೩. ಸ್ವಾತಂತ್ರ್ಯದ ಮೌಲ್ಯವು ಮರಣ.

೨೪. ನಾನು ವಿನೋದಪ್ರಿಯನಾಗಿರದಿದ್ದರೆ ಎಂದೋ ಆತ್ಮಹತ್ಯಮಾಡಿಕೊಳ್ಳುತಿದ್ದೆ.

೨೫. "ಮದ್ಯಪಾನಮಾಡುವವರ ವಿಷಯವಾಗಿ ನೀವು ಅಷ್ಟೊಂದು ನಿರ್ದಯರಾಗಿರುವಿರೇಕೆ?" — ಗಾಂಧಿಜಿಯವರನ್ನು 1931ರಲ್ಲಿ ಲಂಡನಿನಲ್ಲೊರ್ವ ಇಂಗ್ಲಿಷ್ ವಿದ್ಯಾರ್ಥಿಯು ಪ್ರಶ್ನಿಸಿದನು.

ಗಾಂಧಿಜಿಯವರಂದರು: "ಏಕೆಂದರೆ, ಆ ಕುಡಿಕತನದ ಶಾಪದ ದುಷ್ಫಲವನ್ನು ಸಹಿಸುವವರ ಬಗ್ಗೆ ನಾನು ದಯಾಧರ್ಮ ಉಳ್ಳವನಾದುದರಿಂದ."

▪▪▪▪▪▪▪▪▪

# ಮಹಾತ್ಮ ಮತ್ತು ಬಂಡವಾಳಗಾರ

ದೊಡ್ಡ ಬಂಡವಾಳಗಾರನೊಬ್ಬನು, ಗಾಂಧಿಜಿಯವರಿಗೆ ಈ ಪ್ರಶ್ನೆ ಹಾಕಿದನು: "ದೇಶಕ್ಕಾಗಿ ತಾವು ನನ್ನನ್ನು ಅಪೇಕ್ಷಿಸುತ್ತಿರೋ ನನ್ನ ಹಣವನ್ನೊ?"

"ನಿಮ್ಮನ್ನು!"—ಗಾಂಧಿಜಿಯವರಂದರು.

"ಹಾಗಾದರೆ, ನಾನು ನನ್ನ ಉದ್ಯಮವನ್ನು ಬಿಟ್ಟು ತಮ್ಮನ್ನು ಸೇರಿದರೆ ತಾವು ನನಗೆ ಯಾವ ಕೆಲಸಕೊಡುವಿರಿ?"

"ನೂಲುವ ಚರಖ" ತಮ್ಮ ಚರಖವನ್ನು ತಿರುಗಿಸುತ್ತಾ, ಗಾಂಧಿಜಿಯವರು ಉತ್ತರವಿತ್ತರು.

▪▪▪▪▪▪▪▪▪

Edited, Printed & Published by K. V. Shenoy
at The Prabhat Printers, Ltd., Mangalore.